# ಕೋನವನ್ನು ಇಬ್ಭಾಗ ಮಾಡುವುದು

**ಕೋಮ್ಯಾಕ್**

ಕೋನಮಾಪಕ ಮತ್ತು ರೂಲರ್ (ಸ್ಕೇಲ್) ಬಳಸಿ ಕೋನವನ್ನು ಎರಡು ಭಾಗವಾಗಿಸುವುದು ಹಿರಿಯ ಪ್ರಾಥಮಿಕ ತರಗತಿಯ ಹಂತದ ಸಾಮಾನ್ಯ ರೇಖಾಗಣಿತ ಪಠ್ಯವಿಷಯದ ಒಂದು ಅಂಗವಾಗಿದೆ. ಇದನ್ನು ಮಾಡಲು ಒಂದು ನಿಯತವಾದ ವಿಧಾನವೇ ಇದೆ ಹಾಗೂ ಅದು ಎಷ್ಟು ಸರಳವಾದ ವಿಧಾನವೆಂದರೆ ಅದಕ್ಕಿಂತಲೂ ಇರಲಿ, ಅದರಷ್ಟೇ ಸರಳವಾದ ಪರ್ಯಾಯ ಮಾರ್ಗವನ್ನು ಸಹ ಕಂಡುಹಿಡಿಯುವುದು ಕಷ್ಟಸಾಧ್ಯ. ಆದರೆ ಇಲ್ಲಿ ಅಂತಹ ವಿಧಾನವೊಂದಿದೆ; ಚಿತ್ರ 1 ಇದನ್ನು ಟ್ವಿಟರ್‌ನ ಒಂದು ಪೋಸ್ಟ್‌ನಲ್ಲಿ ಘೋಷಿಸಲಾಗಿತ್ತು [1].

ಈ ವಿಧಾನವನ್ನು ಯಾವುದೇ ಪದಗಳನ್ನು ಬಳಸದೆ ಕೇವಲ ಚಿತ್ರದ ಸಹಾಯದಿಂದಲೇ ನಿರೂಪಿಸಬಹುದು. ಚಿತ್ರ 1ರಲ್ಲಿ ಇಬ್ಭಾಗ ಮಾಡಬೇಕಾದ ಕೋನವು $\angle ABC$ ಆಗಿದೆ. ಚಿತ್ರದಲ್ಲಿ ತೋರಿಸಿರುವಂತೆ $DE$ ಮತ್ತು $FG$ ಎಂಬ ಎರಡು ವೃತ್ತಖಂಡಗಳನ್ನು $B$ ಅನ್ನು ಕೇಂದ್ರವಾಗಿಸಿಕೊಂಡು ಎಳೆಯಿರಿ. ನಂತರ ರೇಖಾ ಖಂಡಗಳಾದ $DG$ ಮತ್ತು $FE$ ಅನ್ನು ಎಳೆಯಿರಿ; ಇವೆರಡೂ ಖಂಡಗಳು $I$ ನಲ್ಲಿ ಛೇದಿಸಲಿ. ಈಗ $BI$ ರೇಖೆಯನ್ನು ಎಳೆಯಿರಿ. ಇದೇ ನಮಗೆ ಬೇಕಾದ ಕೋನ ವಿಭಜಕ.




ಚಿತ್ರ 1

## ಆಕರಗಳು


1. ಸಾಲ್ವ್ ಮೈ ಮ್ಯಾಥ್ಸ್ (ಟ್ವಿಟರ್), *ಎ ಸಿಂಪ್ಲರ್ ವೇ ಟು ಬೈಸೆಕ್ಟ್ ಎನ್ ಆಂಗಲ್ ಯೂಸಿಂಗ್ ಕಂಪಾಸ್;* https://twitter.com/solvemymaths/status/776842316938113024?s=03



**ದ ಕಮ್ಯುನಿಟಿ ಮ್ಯಾಥಮಾಟಿಕ್ಸ್ ಸೆಂಟರ್** (ಕೋಮ್ಯಾಕ್) ಎಂಬುದು ರಿಷಿ ವ್ಯಾಲಿ ಎಜುಕೇಶನ್ ಸೆಂಟರ್ (ಆಂಧ್ರಪ್ರದೇಶ) ಮತ್ತು ಸಹ್ಯಾದ್ರಿ ಸ್ಕೂಲ್ (ಕೆಎಫ್ಐ) ಸಂಸ್ಥೆಗಳ ವಿಸ್ತೃತ ಅಂಗವಾಗಿದೆ. ಅದು ಗಣಿತ ಶಿಕ್ಷಣ ಶಿಬಿರಗಳನ್ನು ಹಮ್ಮಿಕೊಳ್ಳುತ್ತದೆ ಮತ್ತು ರಾಜ್ಯ ಸರ್ಕಾರ ಹಾಗೂ ಸರ್ಕಾರೇತರ ಸಂಸ್ಥೆಗಳಿಗೆ ಬೋಧನ ಸಾಮಗ್ರಿಗಳನ್ನು ಸಿದ್ಧಪಡಿಸಿಕೊಡುವ ಕೈಂಕರ್ಯದಲ್ಲಿಯೂ ತೊಡಗಿದೆ. ಕೋಮಾಕ್ನ ಸಂಪರ್ಕ ಕೊಂಡಿ: shailesh.shirali@gmail.com.

**ಅನುವಾದ** : ಎನ್. ರಾಮನಾಥ್